ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಶುಕ್ರವಾರ, ದಿನಾಂಕ: 11ನೇ ಡಿಸೆಂಬರ್, 2020

ಬೀದರ್ ಜಿಲ್ಲೆಯ 5 ತಾಲ್ಲೂಕು ಪಂಚಾಯತಿಯ ಅನಿರ್ಬಂಧಿತ ಅನುದಾನ ಬಿಡುಗಡೆಯ ಕುರಿತು

ಶ್ರೀವಿಜಯ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

482(562) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕೋವಿಡ್-19ರ ಹಿನ್ನೆಲೆಯಲ್ಲಿ 2019-20ನೇ ಸಾಲಿನ ತಾಲ್ಲೂಕು ಪಂಚಾಯತಿಯ ಅನಿರ್ಬಂಧಿತ ಅನುದಾನವನ್ನು ಬಿಡುಗಡೆಗೊಳಿಸಲು ಸಾಧ್ಯವಾಗದೆಂದು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳ ಸಿ.ಇ.ಒ. ರವರಿಗೆ ಪತ್ರ ಬರೆದು ತಿಳಿಸಿರುವುದು ನಿಜವೇ ;

(ಆ) ಹಾಗಿದ್ದಲ್ಲಿ, ಸದರಿ ಪತ್ರದ ರೀತ್ಯಾ 2020-21ನೇ ಸಾಲಿನ ತಾಲ್ಲೂಕು ಪಂಚಾಯತಿಯ ಅನಿರ್ಬಂಧಿತ ಅನುದಾನದ ಲೆಕ್ಕ ಶೀರ್ಷಿಕೆ 2515-00-197-1-07-300ರಡಿ ಹಂಚಿಕೆ ಮಾಡಿರುವ ರೂ.150.00 ಲಕ್ಷ ಅನುದಾನಕ್ಕೆ ತಯಾರಿಸುವ ಕ್ರಿಯಾ ಯೋಜನೆಯಲ್ಲಿ 2019-20ನೇ ಸಾಲಿನಲ್ಲಿ ಕಾಮಗಾರಿಗಳನ್ನು ನಿರ್ವಹಿಸಿದ ಗುತ್ತಿಗೆದಾರರ ಬಾಕಿ ಪಾವತಿಸಿ ಹೊಸ ಕಾಮಗಾರಿ ಕೈಗೊಳ್ಳುವಂತೆ ಸೂಚಿಸಿರುವುದಕ್ಕೆ ಕಾರಣಗಳೇನು ; (ವಿವರ ನೀಡುವುದು)

(ಇ) ಅನುದಾನ ಕಡಿತದ ಕ್ರಮಗಳಿಂದ 2020-21ನೇ ಸಾಲಿನ ಹೊಸ ಕಾಮಗಾರಿ ಕೈಗೆತ್ತಿಕೊಳ್ಳಲು ಅನುದಾನದ ಕೊರತೆಯಾಗಿದ್ದು, ಇದನ್ನು ನೀಗಿಸಲು ಸರ್ಕಾರ ಕೈಗೊಂಡ ಕ್ರಮಗಳೇನು ?